

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 446
ಸದಸ್ಯರ ಹೆಸರು : ಶ್ರೀ ಅರುಣ ಶಹಾಪುರ
ಉತ್ತರಿಸುವ ದಿನಾಂಕ : 18-02-2022
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದಡಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಹಾಗೂ ಬೋಧಕೇತರಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ಒದಗಿಸುವ ಬೇಡಿಕೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಡಿಯಲ್ಲಿನ ವಸತಿ ಶಾಲಾ/ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಖಾಯಂ ಸಿಬ್ಬಂದಿಗಳಿಗೆ ಜ್ಯೋತಿ ಸಂಜೀವಿನಿ ಯೋಜನೆ ಹಾಗೂ ನಗದು ರಹಿತ ಸೌಲಭ್ಯಗಳನ್ನು ನೀಡುವ ಸಂಬಂಧ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರಿಗೆ ಪತ್ರ ವ್ಯವಹರಿಸಲಾಗಿದ್ದು, ಸದರಿಯವರು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ರವರ ಅಭಿಪ್ರಾಯ ಕೋರಿರುತ್ತಾರೆ.<br>ಈ ಸಂಬಂಧ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಖಾಯಂ ನೌಕರರು ಮತ್ತು ಅವರ ಅವಲಂಭಿತರಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ಅಳವಡಿಸಲು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮುಖಾಂತರ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ನೊಂದಿಗೆ ಸಮಾಲೋಚಿಸಿ ಯೋಜನೆ ಯನ್ನು ವಿಸ್ತರಿಸುವಂತೆ ಅಭಿಪ್ರಾಯ ನೀಡಿದೆ.<br>ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರು ಸಂಘದ ನೌಕರರಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ವಿಸ್ತರಿಸಲು ಕೆಲವು ಷರತ್ತುಗಳಿಗೆ ಒಳಪಟ್ಟು ತಾತ್ವಿಕ ಒಪ್ಪಿಗೆ ನೀಡಿರುತ್ತಾರೆ.<br>ಕಾರ್ಯನಿರ್ವಾಹಕ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರ ಕೋರಿಕೆಯಂತೆ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವಸತಿ ಶಾಲೆ/ಕಾಲೇಜುಗಳ ಸಿಬ್ಬಂದಿಗಳು |
| ಇ) | ಈ ಬಗ್ಗೆ ಪ್ರಸ್ತಾವನೆಯು ಯಾವ ಹಂತದಲ್ಲಿದೆ; ಯಾವ ಕಾಲಮಿತಿಯ ಒಳಗೆ ಈ ನೌಕರರಿಗೆ ಈ ಯೋಜನೆಯನ್ನು ಜಾರಿಗೊಳಿಸಲಾಗುವುದು? (ಪ್ರಸ್ತಾವನೆಯ ಸಂಪೂರ್ಣ ವಿವರವನ್ನು ಒದಗಿಸುವುದು) | |

| | | |
|---|---|---|
| | | ಮತ್ತು ಅವರ ಅವಲಂಬಿತರ ಹೆಸರು, ವಯಸ್ಸು, ಆಧಾರ್ Bio metric finger impression/IRIS ವಿಳಾಸ ಇತ್ಯಾದಿ ವಿವರಗಳನ್ನು ಸಂಘದ ಹೆಚ್.ಆರ್.ಎಂ.ಎಸ್ ತಂತ್ರಾಂಶದಲ್ಲಿ ನಮೂದಿಸಲು ಪ್ರಾಂಶುಪಾಲರುಗಳಿಗೆ ಸೂಚಿಸಲಾಗಿರುತ್ತದೆ.<br><br>ಆದರೆ ಪ್ರಸ್ತುತ ಲಭ್ಯವಿರುವ ಹೆಚ್.ಆರ್.ಎಮ್.ಎಸ್ ತಂತ್ರಾಂಶದಲ್ಲಿ ಮೇಲ್ಕಂಡ ಮಾಹಿತಿಯನ್ನು ನಮೂದಿಸಲು ತಾಂತ್ರಿಕ ತೊಂದರೆಗಳು ಇರುವುದಾಗಿ ವಸತಿ ಶಾಲೆಗಳ ಪ್ರಾಂಶುಪಾಲರು ತಿಳಿಸಿರುತ್ತಾರೆ. ಈ ಹಿನ್ನಲೆಯಲ್ಲಿ ತಾಂತ್ರಿಕ ದೋಷವನ್ನು ಸರಿಪಡಿಸುವಂತೆ ಯೋಜನಾ ನಿರ್ದೇಶಕರು, ಹೆಚ್.ಆರ್.ಎಮ್.ಎಸ್. ಸೆಲ್ ರವರಿಗೆ ಪತ್ರ ಬರೆಯಲಾಗಿದೆ.<br><br>ಈ ಸಂಬಂಧ ಯೋಜನಾ ನಿರ್ದೇಶಕರು, ಹೆಚ್.ಆರ್.ಎಮ್.ಎಸ್. ಸೆಲ್ ರವರನ್ನು ಭೇಟಿ ಮಾಡಿ ತಾಂತ್ರಿಕ ಸಮಸ್ಯೆಗಳನ್ನು ನಿವಾರಿಸುವ ಬಗ್ಗೆ ಚರ್ಚಿಸಲಾಗಿ, ಪ್ರಸ್ತುತ ಲಭ್ಯವಿರುವ ಹೆಚ್.ಆರ್.ಎಮ್.ಎಸ್ ತಂತ್ರಾಂಶದಲ್ಲಿ ತಾಂತ್ರಿಕ ನ್ಯೂನತೆಗಳನ್ನು ನಿವಾರಿಸಬೇಕಾದರೆ, ತಂತ್ರಾಂಶವನ್ನು ಉನ್ನತೀಕರಿಸುವುದು ಅವಶ್ಯವಿರುತ್ತದೆ. ತಂತ್ರಾಂಶವನ್ನು ಉನ್ನತೀಕರಿಸುವ ಪ್ರಕ್ರಿಯೆಗೆ ಸಮಯಾವಕಾಶದ ಅವಶ್ಯಕತೆ ಇರುವುದಾಗಿ ತಿಳಿಸಿರುತ್ತಾರೆ. ಆದ್ದರಿಂದ ಹೆಚ್.ಆರ್.ಎಮ್.ಎಸ್. ಸೆಲ್ ವತಿಯಿಂದ ತಾಂತ್ರಿಕದೋಷ ಬಗೆಹರಿಯುವವರೆಗೆ ತಾತ್ಕಾಲಿಕವಾಗಿ ದೃಢೀಕೃತ ದಾಖಲೆಗಳ (Manual Documents) ಆಧಾರದ ಮೇಲೆ ಸಂಘದ ಸಿಬ್ಬಂದಿಗಳಿಗೆ ಯೋಜನೆಯನ್ನು ಪ್ರಾರಂಭಿಸಲು ಕಾರ್ಯನಿರ್ವಾಹಕ ನಿರ್ದೇಶಕರು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರಿಗೆ ಪತ್ರದ ಮೂಲಕ ಕೋರಲಾಗಿರುತ್ತದೆ.<br><br>ದಿನಾಂಕ 06.12.2021 ರ ಕಾರ್ಯನಿರ್ವಾಹಕ ನಿರ್ದೇಶಕರು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರ ಪತ್ರದಲ್ಲಿ ಫಲಾನುಭವಿ ಗುರುತಿಸುವಿಕೆ, ಪ್ರೀಯಾಥ್ ಮತ್ತು ಕ್ಲೈಮು ಎಲ್ಲವೂ ಆನ್‌ಲೈನ್ ಆಗಿರುತ್ತದೆ. ಯಾವುದೇ ದೃಢೀಕೃತ ದಾಖಲೆಗಳನ್ನು (Manual Documents) ಎಸ್.ಎ.ಎಸ್.ಟಿ ಯಡಿಯಲ್ಲಿ ಪರಿಗಣಿಸುವುದಿಲ್ಲ. ಜ್ಯೋತಿ ಸಂಜೀವಿನಿ ಮಾರ್ಗಸೂಚಿಯನ್ವಯ ಹೆಚ್.ಆರ್.ಎಮ್.ಎಸ್ ತಂತ್ರಾಂಶದಲ್ಲಿರುವ ಸಿಬ್ಬಂದಿಗಳ ವಿವರಗಳನ್ನು ಮಾತ್ರ ಪರಿಗಣಿಸಬೇಕಾಗಿರುತ್ತದೆ. ಆದಕಾರಣ ಹೆಚ್.ಆರ್.ಎಮ್.ಎಸ್ ತಂತ್ರಾಂಶದಲ್ಲಿ ಸಿಬ್ಬಂದಿಗಳ |

| | | |
|---|---|---|
| | | ವಿವರಗಳು ಲಭ್ಯವಾದ ನಂತರ ಜ್ಯೋತಿ ಸಂಜೀವಿನಿ ಯೋಜನೆಯ ಪ್ರಯೋಜನ ಪಡೆಯಬಹುದಾಗಿದೆಯೆಂದು ತಿಳಿಸಲಾಗಿರುತ್ತದೆ.<br><br>ಯೋಜನಾ ನಿರ್ದೇಶಕರು, ಹೆಚ್.ಆರ್.ಎಮ್.ಎಸ್. ಸೆಲ್ ರವರಿಗೆ ಹೆಚ್.ಆರ್.ಎಮ್.ಎಸ್ ತಂತ್ರಾಂಶದಲಿನ ತಾಂತ್ರಿಕ ಸಮಸ್ಯೆಗಳನ್ನು ಪರಿಹರಿಸುವಂತೆ ಕೋರಲಾಗಿರುತ್ತದೆ. ಅಲ್ಲದೇ ಜ್ಯೋತಿ ಸಂಜೀವಿನಿ ಯೋಜನೆಯನ್ನು ಸಂಘದ ಸಿಬ್ಬಂದಿಗಳಿಗೆ ವಿಸ್ತರಿಸಲು ಯೋಜನಾ ನಿರ್ದೇಶಕರು, ಹೆಚ್.ಆರ್.ಎಮ್.ಎಸ್. ಸೆಲ್ ರವರನ್ನು ಭೇಟಿ ಮಾಡಿ ಜರೂರಾಗಿ ಸಮಸ್ಯೆಯನ್ನು ಬಗೆಹರಿಸುವಂತೆ ಕೋರಲಾಗಿರುತ್ತದೆ. ತಾಂತ್ರಿಕ ಸಮಸ್ಯೆಗಳು ಬಗೆಹರಿದ ನಂತರ ಮುಂದಿನ ಕ್ರಮವಹಿಸಲಾಗುವುದು. |

ಸಂಖ್ಯೆ: ಸಕಇ 89 ಮೊದೇಶಾ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು